ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಕೆ.ಎ.ಎಸ್ ಹುದ್ದೆಯಿಂದ ಐ.ಎ.ಎಸ್. ಹುದ್ದೆಗೆ ಪದೋನ್ನತಿ ಬಗ್ಗೆ

ಶ್ರೀ ಬಸವರಾಜ ಶಿವಲಿಂಗಪ್ಪ ಹೊರಟ್ಟಿ (ಶಿಕ್ಷಕರ ಕ್ಷೇತ್ರ) :-

693 (987) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ಶಾರ್ಟ್ ಸರ್ವೀಸ್ ಕಮೀಷನ್ಡ್ ಅಡಿಯಲ್ಲಿ ಸೇವೆ ಸಲ್ಲಿಸಿ ರಾಜ್ಯ ಸಿವಿಲ್ ಸೇವೆಯಲ್ಲಿರುವ ಅಧಿಕಾರಿಗಳಿಗೆ ಬಡ್ತಿ ನೀಡುವಾಗ ನಿಯಮಗಳಲ್ಲಿ ವಿಶೇಷ ಅವಕಾಶವಿದ್ದಾಗ್ಯೂ ಸರ್ಕಾರ ಇದನ್ನು ಪರಿಗಣಿಸದಿರುವುದು ನಿಜವೇ; ನಿಜವಿದ್ದಲ್ಲಿ, ಕಾರಣಗಳೇನು;

(ಆ) ಕೇಂದ್ರ ಸರ್ಕಾರವು ಶಾರ್ಟ್ ಸರ್ವೀಸ್ ಕಮೀಷನ್ಡ್ ಅಧಿಕಾರಿಗಳ ನೇಮಕಾತಿ ಅರ್ಹತಾ ದಿನಾಂಕವನ್ನು ನಿರ್ಧರಿಸಲು ಆಯಾ ರಾಜ್ಯ ಸರ್ಕಾರಗಳೇ ಪ್ರಾಧಿಕಾರಿಗಳೆಂದು ಹೇಳಿದ್ದರೂ ಇಲ್ಲಿಯ ಸರ್ಕಾರಿ ಸಿವಿಲ್ ಸೇವೆಯಲ್ಲಿರುವ ನೌಕರರ ಜೇಷ್ಠತೆಯನ್ನು ಇನ್ನು ಏಕೆ ನಿಗಧಿಪಡಿಸಿರುವುದಿಲ್ಲ;

(ಇ) ಕೇಂದ್ರ ಲೋಕಸೇವಾ ಆಯೋಗವು ಬಡ್ತಿ ನಿಯಮಗಳಲ್ಲಿ ಶಾರ್ಟ್ ಸರ್ವೀಸ್ ಕಮೀಷನ್ಡ್ ಅಧಿಕಾರಿಗಳ ಜೇಷ್ಠತೆಯನ್ನು ಸೈನ್ಯದಲ್ಲಿ ಸಲ್ಲಿಸಿದ ಸೇವಾವಧಿಯನ್ನು ಪರಗಣಿಸಿ ನಿರ್ಧರಿಸಬೇಕು ಎಂದು ಸೂಚಿಸಿದ್ದಾಗ್ಯೂ ಕೇವಲ ರಾಜ್ಯ ಸಿವಿಲ್ ಸೇವೆಯ ಅವಧಿಯನ್ನು ಪರಿಗಣಿಸಿ ಕೇಂದ್ರ ಲೋಕಸೇವಾ ಆಯೋಗಕ್ಕೆ ಪ್ರಸ್ತಾವನೆ ಕಳುಹಿಸಿರುವುದು ನಿಜವೇ; ನಿಜವಿದ್ದಲ್ಲಿ ಕಾರಣಗಳೇನು;

(ಈ) ಕೇಂದ್ರ ಆಡಳಿತ ನ್ಯಾಯ ಮಂಡಳಿ ತನ್ನ ಪತ್ರ ಸಿಎಟಿ 230/2016 ರಲ್ಲಿ ಕಾನೂನಿಗೆ ವಿರುದ್ಧವಾದದ್ದೆಂದು ಹೇಳಿದ್ದರೂ ನಿಯಮಬಾಹಿರವಾಗಿ ಕೆಲವರಿಗೆ ಅರ್ಹತಾ ದಿನಾಂಕವನ್ನು ನಿಗಧಿಪಡಿಸಿದ ಅಧಿಸೂಚನೆಯನ್ನು ಹಿಂಪಡೆದಿರುವುದು ನಿಜವೇ; ನಿಜವಿದ್ದಲ್ಲಿ, ಅವರ ಹೆಸರು ಮತ್ತು ಹುದ್ದೆ ಕುರಿತು ಮಾಹಿತಿ ನೀಡುವುದು;

(ಉ) ಸರ್ಕಾರದ ಜೇಷ್ಠತಾ ನಿಯಮಗಳು 1957ರ ನಿಯಮ 6(ಎ)ರ ಸೇವಾ ಜೇಷ್ಠತೆಯನ್ನು ಪರಿಗಣಿಸುವ ನಿಯಮಕ್ಕೆ ಅನ್ವಯವಾಗುವುದಿಲ್ಲ ಎಂದಾದರೆ ಅದಕ್ಕೆ ಸಂಬಂಧಿಸಿದ ನ್ಯಾಯಾಲಯದ ತೀರ್ಪುಗಳನ್ನು ಅವಲಂಬಿಸಿರುವುದು ನಿಜವೇ;

(ಊ) ನ್ಯಾಯಾಲಯ ನೀಡಿದ ಆದೇಶಗಳನ್ನು ಅವಲಂಬಿಸಿ ಕಾನೂನು ಅಭಿಪ್ರಾಯ ನೀಡುವಂತೆ ಕಾನೂನು ಇಲಾಖೆಯನ್ನು ಕೋರಿದ್ದೇಕೆ; ಕೋರಿದ್ದಲ್ಲಿ ಇಂತಹ ಪ್ರಕರಣಗಳ ಅಡಿಯಲ್ಲಿ ಸೇವೆ ಸಲ್ಲಿಸುತ್ತಿರುವ ಅಧಿಕಾರಿಗಳು ಬಡ್ತಿಯಿಂದ ಐ.ಎ.ಎಸ್. ಹುದ್ದೆಯನ್ನು ಬಯಸಿದ್ದಾರೆಯೇ ?